ಎಂ. ಜೆ. ಶುದ್ಧೋದನ

M. J. SHUDODANA



ಕರ್ನಾಟಕ ಲಲಿತಕಲಾ ಅಕಾಡೆಮಿ

Karnataka Lalithakala Academy



## ಎಚ್. ಎಂ. ಪರಮೇಶ

ಚಿತ್ರದುರ್ಗ ಜಿಲ್ಲೆಯ ಹರ್ತಿಕೋಟೆಯ ಶ್ರೀ ಪರಮೇಶ್ವರಯ್ಯ ಅವರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪದವೀಧರರು. ಶ್ರೀಯುತರು ಕಳೆದ 30 ವರ್ಷಗಳಿಂದ ಅಧ್ಯಾಪನ ವೃತ್ತಿಯಲ್ಲಿ ನಿರತರಾಗಿದ್ದು, ಪ್ರಸ್ತುತ ಮಂಡ್ಯದ ಬಾಲಕರ ಸರ್ಕಾರಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

'ಪಿಸುಗುಟ್ಟಿನ ಬಯಕೆ' ಕವನ ಸಂಕಲನದಿಂದ ಸಾಹಿತ್ಯಲೋಕ ಪ್ರವೇಶಿಸಿದ ಇವರು ಹದಿನೈದಕ್ಕೂ ಮಿಕ್ಕ ಕೃತಿಗಳನ್ನು ಹೊರತಂದಿದ್ದಾರೆ.

'ಬದುಕೊಂದು ದಾರಿ' ಮತ್ತು 'ದುಡಿಮೆಗೊಂದು ದಾರಿ' ಎಂಬ ಇವರ ಎರಡು ಕೃತಿಗಳಿಗೆ ಜನ ಶಿಕ್ಷಕ ನಿರ್ದೇಶನಾಲಯ ನವದೆಹಲಿಯಿಂದ ರಾಷ್ಟ್ರೀಯ ಪುರಸ್ಕಾರ ದೊರಕಿದೆ. 'ಜೇನುಸಾಕಣೆ' ಎಂಬ ಇವರ ಮತ್ತೊಂದು ಕೃತಿ ಕರ್ನಾಟಕ ರಾಜ್ಯದ ಜನಶಿಕ್ಷಣ ನಿರ್ದೇಶನಾಲಯದಿಂದ ಪ್ರಶಸ್ತಿ ಗಳಿಸಿದೆ. ಸಂಗೊಳ್ಳಿ ರಾಯಣ್ಣ, ಲೋಕನಾಯಕನ ಕಥೆ, ವೀರವನಿತೆ ಅಹಲ್ಯಾಬಾಯಿ, ಗೋಬರ್ ಅನಿಲ, ಕೋಳಿ ಸಾಕಣೆ ಮತ್ತು ನೀರಾವರಿ ಇದೇ ಮಾಲೆಯ ಪುಸ್ತಕಗಳು.

ಹೊತ್ತು ಮುಳುಗುವ ಮುನ್ನ, ಶೇಷ ಶೋಷಿತರು, ಕಂತೆಗೆ ತಕ್ಕ ಬೊಂತೆ ಇವರ ಪ್ರಸಿದ್ಧ ನಾಟಕಗಳು. ಇವು ಹಲವಾರು ಬಾರಿ ರಂಗಪ್ರಯೋಗ ಕಂಡಿವೆ.

ಕನಕದಾಸರ 'ಹರಿಭಕ್ತಸಾರ' ಮತ್ತು ಕೀರ್ತನೆಗಳ ಸಂಗ್ರಹ 'ಕನಕ ಸುಧೆ' ಇವರ ಸಂಪಾದಿತ ಕೃತಿಗಳು. ಇವರು ಬರೆದ ವಿಮರ್ಶೆ, ಸಂಶೋಧನಾ ಹಾಗೂ ಜಾನಪದಕ್ಕೆ ಸಂಬಂಧಿಸಿದ ಹಲವಾರು ಲೇಖನಗಳು ನಾಡಿನ ಪ್ರಸಿದ್ಧ ಪತ್ರಿಕೆ, ಸಂಸ್ಕರಣ ಹಾಗೂ ಅಭಿನಂದನಾ ಗ್ರಂಥಗಳಲ್ಲಿ ಪ್ರಕಟವಾಗಿವೆ.

ಕರ್ನಾಟಕ ಕಲಾವಿದರು: 35

# ಎಂ. ಜೆ. ಶುದ್ಧೋದನ

ಎಚ್. ಎಂ. ಪರಮೇಶ

ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು – 560 002

M. J. SHUDODANA: A Biography by H. A. Paramesha, for the Karnataka Lalitkala Academy, Nrupatunga Road, Bangalore - 560 002.

Published By: K. MUKUNDAN, Registrar.

First Impression: 1995

Copies: 1000

Price: Rs. 10-00



*Printed by:*

**Sathyasri Printers Pvt. Ltd.,**
Chamarajpet, Bangalore - 560 018

# ಮೊದಲ ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವುದು ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದುಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ತಿಳುವಳಿಕೆ ಉಂಟುಮಾಡಲು ಸಹಾಯವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಮೂವತ್ತೈದು ಸಚಿತ್ರ ಸುಂದರ ಹೊತ್ತಿಗೆಗಳು ಹೊರಬಂದಿವೆ. ಈಗ, ಅಂದರೆ 1994–95ನೇ ಸಾಲಿನಲ್ಲಿ ಹಲವಾರು ಹೊತ್ತಿಗೆಗಳು ಹೊರಬಂದಿದ್ದು, ಇನ್ನೂ ಒಂದೆರಡು ಸಿದ್ಧವಾಗುತ್ತಲಿವೆ. ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಹಿಂದಿನ ಮತ್ತು ಇಂದಿನ ಪೀಳಿಗೆಗೆ ಹಿರಿಯರಾದ ಎಂ. ಜೆ. ಶುದ್ಧೋದನ ಅವರನ್ನು ಕುರಿತದ್ದು. ಈ ಮಾಲೆ ಅತ್ಯಂತ ಜನಪ್ರಿಯವಾಗಿದ್ದು, ಈಗಾಗಲೇ ಕೆಲವು ಪುಸ್ತಕಗಳು ಪುನರ್‌ಮುದ್ರಣವಾಗಿರುವುದು ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನದ ಬಗ್ಗೆ ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳೂ, ಆಯಾ ಕಲಾವಿದರ, ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ, ಅವರ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

ಪಿ.ಆರ್. ತಿಪ್ಪೇಸ್ವಾಮಿ
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ

ಬೆಂಗಳೂರು



# ಎಂ. ಜೆ. ಶುದ್ಧೋದನ

ಮೈಸೂರಿನ ಪ್ರಶಾಂತ ವಿಸ್ತರಣಗಳಲ್ಲೊಂದಾದ ಗೋಕುಲಂ ಬಡಾವಣೆಯ 'ಡಾಕ್ಟರ್ಸ್ ಕಾರ್ನರ್'ನ ಸಮೀಪದಲ್ಲಿರುವ ಪುಟ್ಟಮನೆಯನ್ನು ಒಳಹೊಕ್ಕರೆ, ಯಾವುದೋ ವಸ್ತು ಪ್ರದರ್ಶನವೊಂದರ ನಡುವೆ ನಿಂತ ಅನುಭವ ನಮಗಾಗುತ್ತದೆ. ಮನೆಯ ಗೋಡೆಗಳನ್ನು ಅಲಂಕರಿಸಿರುವ ಅನೇಕ ಚಿತ್ರಗಳು, ಸುತ್ತಲೂ ಗೋಡೆಗಳನ್ನು ಒರಗಿನಿಂತಿರುವ ಆಳೆತ್ತರದ ಅನೇಕ ಭಾವಚಿತ್ರಗಳು, ಭೂದೃಶ್ಯಗಳು, ತೈಲವರ್ಣ ಚಿತ್ರಗಳು, ಚಿತ್ರಾಧಾರ (ಈಸ್ಲ್)ದಲ್ಲಿ ಕೊನೆಯ ಹಂತಹ ಕುಂಚಸ್ಪರ್ಶಕ್ಕೆ ಕಾದುನಿಂತಿರುವ ಅರೆಮುಗಿದ ಕಲಾಕೃತಿ. ಹಲವು ಆಟಿಕೆಯ ವಸ್ತುಗಳು ಮತ್ತು ಇತ್ತೀಚೆಗೆ ತಯಾರಿಸಲು ಆರಂಭಿಸಿರುವ ಮರದ ಕೆತ್ತನೆಯ ಉಡುಗೊರೆಯ ವಸ್ತುಗಳು ಹಜಾರದಲ್ಲಿ ತುಂಬಿರುವುದನ್ನು ಕಾಣಬಹುದು. ಇವುಗಳ ನಡುವೆ ವಯೋವೃದ್ಧರೂ, ಸ್ಥೂಲದೇಹಿಗಳೂ ಆದ ಕಲಾವಿದ ಶುದ್ಧೋದನರು ಕಂಡುಬರುತ್ತಾರೆ. ಒಳ ಅಂಗಿ ಮತ್ತು ಬಣ್ಣದ ಅಡ್ಡ ಪಂಚೆಯನ್ನು ಸುತ್ತಿಕೊಂಡ

ಕನ್ನಡಕಧಾರಿ ಶುದ್ಧೋದನರಿಗೆ ಚಿತ್ರರಚನೆ ಅವರ ಜೀವನದ ಒಂದು ಭಾಗವಾಗಿದೆ. ವಿಶ್ರಾಂತ ಜೀವನದ ಅಮೂಲ್ಯ ಕಾಲವನ್ನು ವ್ಯಥಾಹರಣ ಮಾಡದೆ ಯಾವುದಾದರೊಂದು ನೂತನ ಕಲಾಸೃಷ್ಟಿಯಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡು, ಬಣ್ಣ ಹಾಗೂ ಕುಂಚಗಳೊಡನೆ ಚಿತ್ರರಚನೆಯಲ್ಲಿ ತಲ್ಲೀನರಾಗಿರುತ್ತಾರೆ.

ಪ್ರಕೃತಿಚಿತ್ರ, ಭಾವಚಿತ್ರ ಮತ್ತು ತೈಲವರ್ಣ ಚಿತ್ರರಚನೆಯಲ್ಲಿ ಹೆಸರಾಂತ ಕಲಾವಿದರಾದ ಶ್ರೀ ಶುದ್ಧೋದನರು ಹಳೆಯ ತಲೆಮಾರಿನ ಪ್ರಮುಖ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ಕರ್ನಾಟಕದ ಖ್ಯಾತ ಕಲಾವಿದರುಗಳಾದ ಎಸ್. ಎಸ್. ಸುಬ್ಬಕೃಷ್ಣ, ಎಂ. ಎ. ಕೃಷ್ಣಸ್ವಾಮಿ, ಬಿ. ಎಚ್. ರಾಮಚಂದ್ರ ಮತ್ತು ಎಸ್. ಹನುಮಯ್ಯ ಅವರುಗಳ ಸಮಕಾಲೀನರು. ಕಲೆಯನ್ನು ಸವಾಲಾಗಿ ಸ್ವೀಕರಿಸಿ, ಬದುಕಿನುದ್ದಕ್ಕೂ ಸಾಧನೆಗೈದು, ಅಪೂರ್ವಸಿದ್ಧಿಯನ್ನು ಪಡೆದಿದ್ದರೂ, ಜೀವನ ಸಂಧ್ಯೆಯ ಈ ಇಳಿಗಾಲದಲ್ಲೂ ಚಿತ್ರಕಲೆಯನ್ನೇ ತಮ್ಮ ಜೀವನದ ಉಸಿರಾಗಿಸಿ ಕೊಂಡಿರುವ ವಿರಳ ಕಲಾವಿದರು.

ಶುದ್ಧೋದನರು ಕಲಾಪ್ರಪಂಚದಲ್ಲಿ ಹೀಗೆ ಬೆಳಕಿಗೆ ಬರಲು ಬಾಲ್ಯದಲ್ಲಿ ಅವರು ಬೆಳೆದು ಬಂದ ಪರಿಸರವೇ ಬಹುಮಟ್ಟಿಗೆ ಕಾರಣ. ಅವರ ತಂದೆಯವರಾದ ಶ್ರೀ ಎಂ. ಎಸ್. ಜಗದೀಶನ್ ಅವರು ಆ ಕಾಲದಲ್ಲೇ ಪ್ರಖ್ಯಾತ ಕಲಾಶಿಕ್ಷಕರೆಂದು ಹೆಸರುಗಳಿಸಿದ್ದರು. ಅವರು ಚಿತ್ರಕಲೆಯಲ್ಲಿ ಮಾತ್ರವಲ್ಲದೆ ಸಂಗೀತ ಮತ್ತು ಶಿಲ್ಪಕಲೆಯಲ್ಲೂ ಪರಿಣತಿಪಡೆದಿದ್ದರು. ಜಗದೀಶನ್ ಅವರು ಅರಸರ ಕಾಲದಲ್ಲಿ ಮೈಸೂರು ನಗರದ ಶಿಕ್ಷಕರ ತರಬೇತಿ ಶಾಲೆಯಲ್ಲಿ ಹಿರಿಯ ಕಲಾಶಿಕ್ಷಕರಾಗಿ ಕೆಲಸ ಮಾಡುತ್ತಿದ್ದರು. ಇಂತಹ ಕಲಾವಿದರ ಸುಪುತ್ರರಾಗಿ ಶುದ್ಧೋದನರು 1914ರ ಫೆಬ್ರವರಿ 2 ರಂದು ಮೈಸೂರಿನಲ್ಲಿ ಜನಿಸಿದರು. ಸೌಮ್ಯ ಸ್ವಭಾವದ, ಸರಳ ಸಜ್ಜನಿಕೆಗಳೇ ಮೂರ್ತಿವೆತ್ತಂತಿದ್ದ ಮಾಯದೇವಿಯವರು ಇವರ ತಾಯಿಯವರು. ತಮ್ಮ ತಂದೆಯವರು ಮನೆಯಲ್ಲಿ ಕುಂಚ ಹಿಡಿದು ಚಿತ್ರರಚನೆ ಮಾಡುತ್ತಿದ್ದರೆ, ಬಾಲಕ ಶುದ್ಧೋದನರು ಕುತೂಹಲದಿಂದ ಅದನ್ನು ನೋಡುತ್ತಾ ಕುಳಿತಿರುತ್ತಿದ್ದರು. ತಮ್ಮ ತಂದೆಯಂತೆ ತಾನೂ ಚಿತ್ರರಚನೆ ಮಾಡಬೇಕೆಂಬ ಹಂಬಲ ಚಿಕ್ಕಮಗುವಾದ ಶುದ್ಧೋದನರಲ್ಲಿ ಮೂಡಿಮಾಯವಾಗುತ್ತಿತ್ತು.

ತಮ್ಮ ತಂದೆಯವರು ಉದ್ಯೋಗದಲ್ಲಿದ್ದ ಶಿಕ್ಷಕರ ತರಬೇತಿ ಶಾಲೆಯ ಅಂಗಸಂಸ್ಥೆಯಾಗಿದ್ದ ಪ್ರಾಥಮಿಕ ಶಾಲೆಯಲ್ಲೇ ಶುದ್ಧೋದನರ ವಿದ್ಯಾಭ್ಯಾಸ ಮೊದಲಾಯಿತು. ಆಗ ಶ್ರೀ ಕೃಷ್ಣ ಅಯ್ಯಂಗಾರ್ ಎನ್ನುವವರು ಶಾಲೆಯ ಮುಖ್ಯೋಪಾಧ್ಯರಾಗಿದ್ದರು. ಜಗದೀಶನ್ ಅವರು ಮೈಸೂರಿನ ವಿಲ್ಲಿಂಗ್‌ಡನ್ ಕಟ್ಟಡದ ಎದುರುಗಡೆ ಇರ್ವಿನ್‌ರಸ್ತೆಯಲ್ಲಿ 10 ರೂಪಾಯಿಗಳ ಬಾಡಿಗೆ ಮನೆಯೊಂದರಲ್ಲಿ ವಾಸವಾಗಿದ್ದರು. ಶುದ್ಧೋದನರು ತಂದೆಯವರ ಜೊತೆಯಲ್ಲೇ ಶಾಲೆಗೆ ಹೋಗಿಬರುವ ಪರಿಪಾಠವನ್ನು ಬೆಳೆಸಿಕೊಂಡಿದ್ದರು. ಪ್ರಾಥಮಿಕ ಶಾಲೆಯ ಅಭ್ಯಾಸದ ದಿನಗಳಲ್ಲಿ ಬಾಲಕ ಶುದ್ಧೋದನರಿಗೆ ಗಣಿತ ತಲೆಗೆ ಹತ್ತುತ್ತಿರಲಿಲ್ಲ. ಒಂದು ದಿನ ಕೇಶವರಾವ್ ಎಂಬ ಅಧ್ಯಾಪಕರು ತರಗತಿಯಲ್ಲಿ ತಲ್ಲೀನರಾಗಿ ಪಾಠ ಮಾಡುತ್ತಿದ್ದರು. ಆಗ ಅನ್ಯಾಸಕ್ತರಾಗಿ, ಏನನ್ನೋ ಬರೆಯುತ್ತಾ ಕುಳಿತಿದ್ದ ಶುದ್ಧೋದನರರನ್ನು ಗಮನಿಸಿದರು. ಕೂಡಲೇ ಅವರ ಬಳಿ ಬಂದು ಪರೀಕ್ಷಿಸಿ ನೋಡಿದರೆ ಪಾಠ ಕೇಳುವುದನ್ನು ಬಿಟ್ಟು ತಮ್ಮ ವ್ಯಂಗ್ಯ ಚಿತ್ರರಚನೆಯಲ್ಲಿ ನಿರತರಾಗಿದ್ದ ಶುದ್ಧೋದನರರನ್ನು ಶಿಕ್ಷಿಸಿದುದಲ್ಲದೆ, ಮತ್ತೊಮ್ಮೆ ಹೀಗೆ ಮಾಡಿದ್ದೇ ಆದರೆ ಬೆರಳು ಕತ್ತರಿಸುವುದಾಗಿ ಬೆದರಿಕೆ ಹಾಕಿದರು. ಆದರೂ ಚಿತ್ರರಚನೆಯ ಗೀಳು ಅವರಿಂದ ದೂರವಾಗಲಿಲ್ಲ.

ಆ ಕಾಲದಲ್ಲಿ ಶಾಲಾ ಶಿಕ್ಷಣದಲ್ಲಿ 'ಡ್ರಾಯಿಂಗ್' ಒಂದು ವ್ಯಾಸಂಗ ವಿಷಯವಾಗಿತ್ತು. ಆದರೆ ಇವರು ಓದುತ್ತಿದ್ದ ಶಾಲೆಯಲ್ಲಿ ಕಲಾಶಿಕ್ಷಕರ ನೇಮಕವಾಗಿರಲಿಲ್ಲ. ಡ್ರಾಯಿಂಗ್ ತರಗತಿಯ ಅವಧಿಯಲ್ಲಿ ಬದಲಿ ಅಧ್ಯಾಪಕರು, ಬೇರೆ ತರಗತಿಯ ವಿದ್ಯಾರ್ಥಿಯಾದ ಶುದ್ಧೋದನರರನ್ನು ಆ ತರಗತಿಗೆ ಕರೆಸಿ ಬೋರ್ಡಿನ ಮೇಲೆ ಚಿತ್ರವೊಂದನ್ನು ಬರೆಸಿ, ಉಳಿದ ವಿದ್ಯಾರ್ಥಿಗಳಿಗೆ ಅದರಂತೆ ಚಿತ್ರಬಿಡಿಸುವುದನ್ನು ಕಲಿಯಲು ತರಗತಿಯ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು. ಹೀಗೆ ಬಾಲ್ಯದಿಂದಲೂ ಚಿತ್ರಕಲೆಯ ಗೀಳು ಹಚ್ಚಿಕೊಂಡ ಶುದ್ಧೋದನರು ಮಾಧ್ಯಮಿಕ ಶಾಲೆಯ ವ್ಯಾಸಂಗ ಮುಗಿದ ಬಳಿಕ, ಉನ್ನತ ವ್ಯಾಸಂಗದ ಸಲುವಾಗಿ ನಗರದ ಪ್ರಖ್ಯಾತವಾದ ಮಹಾರಾಜಾ ಪ್ರೌಢಶಾಲೆಗೆ ಸೇರಿದರು. ಪ್ರೌಢ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ, ಇಂದು ಪ್ರಸಿದ್ಧ ಸಾಹಿತಿಯೊಂದು

ಹೆಸರು ಪಡೆದಿರುವ ಶ್ರೀ ಆರ್. ಕೆ. ನಾರಾಯಣ್ ಅವರ ಸೋದರ ಆರ್. ಕೆ. ಬಲರಾಮ್ ತಮ್ಮ ಸಹಪಾಠಿಯಾಗಿದ್ದುದನ್ನು ಶುದ್ಧೋದನರು ಹೆಮ್ಮೆಯಿಂದ ನೆನೆಯುತ್ತಾರೆ. ಪ್ರೌಢಶಾಲಾ ವ್ಯಾಸಂಗದ ಅವಧಿಯಲ್ಲೂ ಶುದ್ಧೋದನರ ಆಸಕ್ತಿಯೆಲ್ಲ ಚಿತ್ರಕಲೆಯ ಕಡೆಗೇ. ಶಾಲಾ ವ್ಯಾಸಂಗದ ಕೊನೆಯಲ್ಲಿ ಪರೀಕ್ಷೆಯಲ್ಲಿ ಡ್ರಾಯಿಂಗ್‌ನಲ್ಲಿ ಅವರು 95% ಅಂಕಗಳನ್ನು ಪಡೆದಿದ್ದರು. ಇದನ್ನು ಗಮನಿಸಿದ ಅವರ ಅಧ್ಯಾಪಕರಾಗಿದ್ದ ಶ್ರೀ ಕಸ್ತೂರಿ ರಾಜ ಚೆಟ್ಟಿಯವರು, ಇವರ ತಂದೆಯವರಾದ ಜಗದೀಶನ್ ಅವರನ್ನು ಕರೆಸಿಕೊಂಡು, ಬಾಲಕ ಶುದ್ಧೋದನನ ಕಲಾಸಕ್ತಿಯನ್ನು ತಿಳಿಸಿ, ಅವನಿಗೆ ಚಿತ್ರಕಲಾಭ್ಯಾಸವನ್ನು ಮುಂದುವರಿಸಲು ಅನುಕೂಲ ಕಲ್ಪಿಸಿ ಕೊಡುವಂತೆ ವ್ಯವಸ್ಥೆ ಮಾಡಬೇಕೆಂದು ಸಲಹೆಯಿತ್ತರು.

ಮನೆಯ ಹಿರಿಯ ಮಗನಾದ ಶುದ್ಧೋದನರಲ್ಲಿ ಸುಪ್ತವಾಗಿದ್ದ ಕಲಾಪ್ರತಿಭೆಯನ್ನು ಗುರುತಿಸಿದ ತಂದೆಯವರು ಮಗನನ್ನು ಪ್ರಸಿದ್ಧ ಚಿತ್ರಕಲಾ ಶಾಲೆಯಾಗಿದ್ದ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಗೆ ಸೇರಿಸಿದರು. ಶಾಲಾ ಪ್ರವೇಶಕ್ಕೆ ಮುನ್ನ ನಡೆಸಿದ ಪ್ರವೇಶ ಪರೀಕ್ಷೆಯಲ್ಲಿ ಬಾಲಕನ ಕಲಾ ಪ್ರೌಢಿಮೆಯನ್ನು ಗುರುತಿಸಿದ ಸಂಸ್ಥೆಯ ಸೂಪರಿಂಟೆಂಡೆಂಟ್‌ರಾಗಿದ್ದ ಎಸ್. ರಾಮಸ್ವಾಮಿ ಅಯ್ಯಂಗಾರ್ ಅವರು ಶುದ್ಧೋದನರನ್ನು ಒಮ್ಮೆಲೆ ಮೂರನೆಯ ತರಗತಿಗೆ ಸೇರಿಸಿಕೊಂಡರು. ಅಲ್ಲಿ ಟಂಕಸಾಲೆಯವರು, ಎಫ್. ಬಿ. ಯಲವಟ್ಟಿಯವರು, ಕೆ. ಕೇಶವಯ್ಯನವರು ಮತ್ತು ಗೋವಿಂದರಾಜುಲು ನಾಯ್ಡು ಮೊದಲಾದ ಪ್ರಸಿದ್ಧ ಕಲಾಶಿಕ್ಷಕರುಗಳ ಮಾರ್ಗದರ್ಶನದಲ್ಲಿ ಚಿತ್ರಕಲೆಯಲ್ಲಿ ಪರಿಣಿತಿಯನ್ನು ಪಡೆಯುವ ಸದವಕಾಶ ಶುದ್ಧೋದನರಿಗೆ ದೊರೆಯಿತು. ಇದೆಲ್ಲಕ್ಕಿಂತ ಮಿಗಿಲಾಗಿ ತಂದೆ ಜಗದೀಶನ್ ಅವರೇ ಮಗನಿಗೆ ಮೊದಲ ಕಲಾಗುರುವಾಗಿದ್ದು ಮಗನಿಗೆ ಮಾರ್ಗದರ್ಶನ ನೀಡುತ್ತಿದ್ದರು. ಶುದ್ಧೋದನರು ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದ ಅವಧಿಯಲ್ಲಿ ವರ್ಣಚಿತ್ರ ಮತ್ತು ತೈಲವರ್ಣ ಚಿತ್ರಗಳ ರಚನೆಯಲ್ಲಿ ವಿಶೇಷ ತರಬೇತಿ ಪಡೆದರು. ಆಗ ಪ್ರಸಿದ್ಧ ಕಲಾವಿದರೆಂದು ಖ್ಯಾತಿ ಪಡೆದಿದ್ದ ಕೇರಳದ ರಾಜಾರವಿವರ್ಮ ಅವರನ್ನು ಶ್ರೀ ನಾಲ್ವಡಿ ಕೃಷ್ಣರಾ

ಒಡೆಯರು ಮೈಸೂರಿಗೆ ಆಹ್ವಾನಿಸಿ ಚಿತ್ರರಚನೆಗೆ ಅವಕಾಶ ಕಲ್ಪಿಸಿ ಕೊಟ್ಟಿದ್ದರು. ಶ್ರೀ ರವಿವರ್ಮರ ಜೊತೆ ಸಹಕಲಾವಿದರಾಗಿ ತಮ್ಮ ಗುರುಗಳಾದ ಕೇಶವಯ್ಯ ಮೊದಲಾದ ಅನೇಕ ಕಲಾವಿದರು ಕೆಲಸ ಮಾಡುತ್ತಿದ್ದದನ್ನು ಗಮನಿಸಿದ ಕಲಾವಿದ್ಯಾರ್ಥಿಗಳು, ಅಂತಹ ಶಿಕ್ಷಕರಿಂದ ಚಿತ್ರಕಲೆಯನ್ನು ಕಲಿಯಲು ಬಯಸುತ್ತಿದ್ದರು. ಶುದ್ಧೋದನರು ತಮ್ಮ ಗುರುಗಳಾದ ಟಂಕಸಾಲೆ ಮತ್ತು ಯಲವಟ್ಟಿಯವರ ಮಾರ್ಗದರ್ಶನದಲ್ಲಿ ಜಲವರ್ಣ ಚಿತ್ರರಚನೆಯಲ್ಲಿ ಪರಿಣತಿಯನ್ನು ಸಾಧಿಸಿದರು. ಜಲವರ್ಣದಲ್ಲಿ ಮೈಸೂರಿನ ಸುತ್ತಮುತ್ತಲಿನ ಅನೇಕ ಭೂದೃಶ್ಯಗಳನ್ನು ಸೆರೆಹಿಡಿದು ಶುದ್ಧೋದನರು 1936 ರ ದಸರಾ ವಸ್ತು ಪ್ರದರ್ಶನದಲ್ಲಿ ತಾವು ರಚಿಸಿದ್ದ ಕಲಾಕೃತಿಗಳನ್ನು ಪ್ರದರ್ಶಿಸಿದರು. ಆ ಚಿತ್ರಗಳು ಹಲವಾರು ಚಿತ್ರರಸಿಕರ ಗಮನ ಸೆಳೆದವು. ಗುರುಗಳಾದ ಯಲವಟ್ಟಿಯವರು ತಮ್ಮ ಶಿಷ್ಯ ಶುದ್ಧೋದನರ ಚಿತ್ರಗಳನ್ನು ಮೆಚ್ಚಿಕೊಂಡು ಮುಕ್ತಕಂಠದಿಂದ ಪ್ರಶಂಸಿಸಿದರು.

ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಭ್ಯಾಸ ಮಾಡುವ ಕಾಲದಲ್ಲೇ ಶುದ್ಧೋದನರು ಖಾಸಗಿಯಾಗಿ ಅಭ್ಯಾಸ ಮಾಡುತ್ತಾ "ಮದ್ರಾಸ್ ಸ್ಕೂಲ್ ಆಫ್ ಆರ್ಟ್ಸ್"ನ ಡಿಪ್ಲೋಮ ಪರೀಕ್ಷೆಯಲ್ಲಿ 1938ರಲ್ಲಿ ಉತ್ತಮ ದರ್ಜೆಯನ್ನು ಗಳಿಸಿ ಪಾಸು ಮಾಡಿದರು. ಶ್ರೀ ಕೇಶವಯ್ಯನವರ ಮಾರ್ಗದರ್ಶನದಲ್ಲಿ, ಇದೇ ಸಮಯದಲ್ಲಿ ಭಾವಚಿತ್ರ ರಚನೆಯಲ್ಲೂ ಉತ್ತಮ ತರಬೇತಿ ಪಡೆದರು.

ಚಾಮರಾಜೇಂದ್ರ ಕಲಾಶಾಲೆಯಲ್ಲಿ ವಿದ್ಯಾಭ್ಯಾಸ ಮುಗಿದ ಬಳಿಕ, 40 ರೂಪಾಯಿಗಳ ಮಾಸಿಕ ವೇತನದ ಮೇಲೆ ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ಡ್ರಾಫ್ಟ್ಸ್‌ಮನ್ ಆಗಿ ಕೆಲಸಕ್ಕೆ ಸೇರಿದರು. ಆಗ ಡಾ। ಎಂ. ಎಚ್. ಕೃಷ್ಣ ಅವರು ಆ ಇಲಾಖೆಯ ನಿರ್ದೇಶಕರಾಗಿದ್ದರು. 1940 ರಿಂದ 44 ರವರೆಗೆ ಅಲ್ಲಿ ಸೇವೆ ಸಲ್ಲಿಸಿದರು. ಅದೇ ವೇಳೆಯಲ್ಲಿ ಶ್ರೀ ಎಂ. ಎ. ಶ್ರೀನಿವಾಸನ್ ಎನ್ನುವವರು, ರಾಜ್ಯದಲ್ಲಿ ಕೈಗಾರಿಕಾ ಮಂತ್ರಿಗಳಾಗಿದ್ದರು, ವಸ್ತುಪ್ರದರ್ಶನವೊಂದರಲ್ಲಿ ಶುದ್ಧೋದನರ ಕಲಾಕೃತಿಗಳನ್ನು ನೋಡಿ ಮೆಚ್ಚಿಕೊಂಡ ಮಂತ್ರಿಗಳ ಶಿಫಾರಸ್ಸಿನ ಮೇಲೆ, ಇವರಿಗೆ ಚನ್ನಪಟ್ಟಣದ ಕರಕುಶಲ ಕೈಗಾರಿಕಾ ಶಾಲೆಯಲ್ಲಿ ಕಲಾಶಿಕ್ಷಕರಾಗಿ ಕೆಲಸ ದೊರೆಯಿತು. ಆ ಶಾಲೆಯಲ್ಲಿ ಆಕರ್ಷಕವಾದ ನವೀನ ಮಾದರಿಯ ಆಟಿಕೆಯ

ವಸ್ತುಗಳು, ಗೊಂಬೆಗಳು, ಹೂದಾನಿಗಳು, ಆಭರಣ ಪೆಟ್ಟಿಗೆ (Jewel Box), ಭಿತ್ತಿಪಲಕ (Wall Plates) ಗಳು, ಗೃಹಾಲಂಕರಣ ಸಾಮಗ್ರಿಗಳು ಮೊದಲಾದ ವಸ್ತುಗಳ ತಯಾರಿಕೆಯ ಹೊಣೆಗಾರಿಕೆ ಇವರ ಪಾಲಿಗೆ ಬಂತು. 1959 ರಿಂದ 15 ವರ್ಷಗಳ ದೀರ್ಘಕಾಲ ಅಲ್ಲಿ ಅಧ್ಯಾಪಕರಾಗಿದ್ದು ಸಾರ್ಥಕ ಸೇವೆಯನ್ನು ಸಲ್ಲಿಸಿದರು. ಇವರ ಸೇವಾವಧಿಯಲ್ಲಿ ತಯಾರಾದ ಅನೇಕ ವಸ್ತುಗಳು ಸ್ವಿಟ್ಜರ್‌ಲೆಂಡ್, ಆಸ್ಟ್ರೇಲಿಯಾ, ಸಿಡ್ನಿ ಮೊದಲಾದ ವಿದೇಶಗಳಿಗೆ ರಫ್ತು ಮಾಡಲ್ಪಡುತ್ತಿದ್ದುವು. ತಮ್ಮ ಸೇವೆಯ ಕೊನೆಯ ಮೂರು ವರ್ಷಗಳ ಕಾಲ ಆ ಸಂಸ್ಥೆಯ ಸೂಪರಿಂಟೆಂಡೆಂಟ್ ಆಗಿ ಬಡ್ತಿ ಪಡೆದು ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ತಮ್ಮ ಕರ್ತವ್ಯವನ್ನು ನಿರ್ವಹಿಸಿದರು. ಇವರ ಸೇವಾವಧಿಯಲ್ಲಿ ಚನ್ನಪಟ್ಟಣದ ಕರಕುಶಲ ಕೈಗಾರಿಕಾ ಶಾಲೆ ಮತ್ತು ಅಲ್ಲಿನ ಬೊಂಬೆಗಳು ಆಟಿಕೆಯ ವಸ್ತುಗಳು ತುಂಬಾ ಪ್ರಸಿದ್ಧಿಯನ್ನು ಗಳಿಸಿ, ಚನ್ನಪಟ್ಟಣದ ಕೀರ್ತಿಯನ್ನು ರಾಷ್ಟ್ರವ್ಯಾಪಿಯನ್ನಾಗಿಸಿದವು.

ಚನ್ನಪಟ್ಟಣದ ಕರಕುಶಲ ಕೈಗಾರಿಕಾ ಶಾಲೆಯಲ್ಲಿ ಕರ್ತವ್ಯ ನಿರತರಾಗಿ ಶುದ್ಧೋದನರಿಗೆ, ತಮ್ಮ ಕಲಾಪ್ರತಿಭೆಯ ಪ್ರಕಾಶಕ್ಕೆ ಈ ಶಾಲೆಯ ಸೀಮಿ ವಾತಾವರಣ ಸಾಲದು ಎಂಬ ಕೊರಗು ಸದಾ ಅವರ ಮನಸ್ಸನ್ನು ಬಾಧಿಸುತ್ತಿತ್ತು ಅದೇ ಸಮಯಕ್ಕೆ ಮೈಸೂರಿನಲ್ಲಿ ತಾವು ಕಲಾವ್ಯಾಸಂಗ ಮಾಡಿದ ಚಾಮರಾಜೇಂ ಕಲಾಶಾಲೆಯ "ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಆಫ್ ಆರ್ಟ್ಸ್" ಹುದ್ದೆ ತಮ್ಮ ಹೆಸರನ್ನು ಶಿಫಾರಸು ಮಾಡಿರುವುದಾಗಿ ತಿಳಿದು, ತಾವು ವ್ಯಾಸಂ ಮಾಡಿದ ಕಲಾಶಾಲೆಯಲ್ಲೇ ಶಿಕ್ಷಕರಾಗಿ ಸೇವೆ ಸಲ್ಲಿಸಬೇಕೆಂಬ ಹಂಬಲದಿಂ 15.8.1959 ರಲ್ಲಿ ಮೈಸೂರಿನ ಚಿತ್ರಕಲಾವಿದರಲ್ಲಿ ಪ್ರಭಾವಿ ವ್ಯಕ್ತಿಯಾಗಿದ್ದ ಪಿ. ಆರ್. ತಿಪ್ಪೇಸ್ವಾಮಿಯವರಿಗೆ ವೈಯುಕ್ತಿಕ ಪತ್ರವೊಂದನ್ನು ಬರೆದು, ತ ಆಯ್ಕೆಗೆ ಸಹಾಯ ಮಾಡಬೇಕೆಂದು ಕೋರಿದರು. ಆ ಪತ್ರದ ಕೆಲವು ಸಾಲುಗ ಹೀಗಿದೆ "I am eager to take up that post and do somethi towards the Development of the art section, which is downtrodden condition. I hope, in the cause of developing f arts, you will take some interest". ಕಲಾವಿದ ಶುದ್ಧೋದನರ ಮಾತುಗ

ತಾವು ವ್ಯಾಸಂಗ ಮಾಡಿದ ಶಾಲೆಯ ದುಃಸ್ಥಿತಿಯನ್ನು ಕಂಡು ವ್ಯಥೆ ಮತ್ತು ಅದರ ಪುನರುಜ್ಜೀವನದ ಬಗೆಗೆ ಎಲ್ಲಿಲ್ಲದ ಆಸಕ್ತಿ ಮತ್ತು ಮಮತೆ ಎದ್ದು ಕಾಣುತ್ತವೆ. ಶ್ರೀ ತಿಪ್ಪೇಸ್ವಾಮಿಯವರ ಪ್ರಾಮಾಣಿಕ ಪ್ರಯತ್ನ ಮತ್ತು ಆಗ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಕೆ. ನಾರಾಯಣ ಸ್ವಾಮಿಯವರ ಪ್ರಯತ್ನದಿಂದ ಇವರ ಅಭೀಪ್ಸೆ ಈಡೇರಿ, ಶುದ್ಧೋದನರು 1959ರ ಕೊನೆಯಲ್ಲಿ ಚಾಮರಾಜೇಂದ್ರ ಕಲಾಶಾಲೆಯ ವೈಸ್ ಪ್ರಿನ್ಸಿಪಾಲ್‌ರಾಗಿ ಅಧಿಕಾರ ವಹಿಸಿಕೊಂಡರು. ಕಲೆಯ ಇತಿಹಾಸ (History of Arts), ಕರಕುಶಲ ವಿಭಾಗ ಮತ್ತು ವಿನ್ಯಾಸ ಮೊದಲಾದ ಪಠ್ಯ ವಿಷಯವನ್ನು ಬೋಧಿಸುತ್ತಾ ಅತ್ಯುತ್ತಮ ಅಧ್ಯಾಪಕರೆಂದು ಜನಪ್ರಿಯತೆಯನ್ನು ಗಳಿಸಿ, ಸುಮಾರು 13 ವರ್ಷಗಳ ಕಾಲ ತಾವು ಕಲಿತ ಕಲಾಶಾಲೆಯ ಉನ್ನತಿಗಾಗಿ ಶ್ರಮಿಸಿದರು. ಇವರ ಕಾರ್ಯಕ್ಷಮತೆಯನ್ನು ಮೆಚ್ಚಿಕೊಂಡ ಸರ್ಕಾರ ನಿವೃತ್ತರಾದ ಬಳಿಕವೂ ಒಂದು ವರ್ಷಕಾಲ ಸೇವೆಯಲ್ಲಿ ಮುಂದುವರಿಯುವಂತೆ ಆದೇಶ ಹೊರಡಿಸಿತು. ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಧ್ಯಾಪಕರಾಗಿದ್ದ ಕಾಲದಲ್ಲಿ ಶುದ್ಧೋದನರಿಗೆ ವೃತ್ತಿ ಸಂತೃಪ್ತಿ (Job Satisfaction) ದೊರಕಿ, ಬಿಡುವಿನ ವೇಳೆಯನ್ನು ಸದುಪಯೋಗಪಡಿಸಿಕೊಂಡು ಉತ್ತಮ ಕಲಾಕೃತಿಗಳನ್ನು ರಚಿಸಿ ಕಲಾಪ್ರಪಂಚದಲ್ಲಿ ಯಶಸ್ಸುಗಳಿಸಲು ಸಾಧ್ಯವಾಯಿತು. ಅವರ ಅತ್ಯುತ್ತಮ ಕಲಾಕೃತಿಗಳೆಲ್ಲ ಈ ಅವಧಿಯಲ್ಲಿ ರಚಿತವಾದಂಥವು ಎಂಬುದನ್ನು ನೆನೆದು ಹರ್ಷಚಿತ್ತರಾಗುತ್ತಾರೆ. ಬೆಂಗಳೂರಿನ ನಗರಪಾಲಿಕೆಯ ಎದುರಿಗಿರುವ ಮಾಗಡಿ ಕೆಂಪೇಗೌಡನ ವಿಗ್ರಹ ಮತ್ತು ಕೆ. ಆರ್. ವೃತ್ತದಲ್ಲಿರುವ ಸರ್. ಎಂ. ವಿಶ್ವೇಶ್ವರಯ್ಯನವರ ವಿಗ್ರಹಗಳ ಮಾದರಿಗಳನ್ನು ಕ್ರಮವಾಗಿ ತಾವು ಮತ್ತು ತಮ್ಮ ಸಹಪಾಠಿ ದಿವಂಗತ ಎಸ್. ಎಸ್. ಸುಬ್ಬಕೃಷ್ಣ ಅವರು ರಚಿಸಿದುದಾಗಿಯೂ, ಈ ವಿಗ್ರಹಗಳನ್ನು ಸಿದ್ಧಪಡಿಸಲು ಮೂರುವರ್ಷಗಳು ಬೇಕಾಯಿತೆಂದೂ, ಈ ಎಲ್ಲ ಕೆಲಸಗಳೂ ತಮ್ಮ ಅಧಿಕಾರದ ಅವಧಿಯಲ್ಲಿ ನಡೆದುವೆಂದು ಸಂತೋಷವ್ಯಕ್ತಪಡಿಸುತ್ತಾರೆ. 1985ರಲ್ಲಿ ವಿಧಾನಸಭೆಯ ಸ್ಪೀಕರ್ ಆಗಿದ್ದ ಶ್ರೀ ಬಿ.ವಿ ಬಾಳಿಗ ಅವರು ವಿಧಾನ ಸಭೆಯ ಸಭಾಂಗಣದಲ್ಲಿ ಹಾಕಲು ಮಹಾತ್ಮ ಗಾಂಧೀಜಿಯವರ ಪೂರ್ಣಪ್ರಮಾಣದ ಭಾವಚಿತ್ರವನ್ನು ರಚಿಸುವ ಕೆಲಸವನ್ನು ಶುದ್ಧೋದನರಿಗೆ ವಹಿಸಿದರು. ಇವರಿಂದ ರಚಿತವಾಗಿ,

ವಸ್ತುಗಳು, ಗೊಂಬೆಗಳು, ಹೂದಾನಿಗಳು, ಆಭರಣ ಪೆಟ್ಟಿಗೆ (Jewel Box), ಭಿತ್ತಿಪಲಕ (Wall Plates) ಗಳು, ಗೃಹಾಲಂಕರಣ ಸಾಮಗ್ರಿಗಳು ಮೊದಲಾದ ವಸ್ತುಗಳ ತಯಾರಿಕೆಯ ಹೊಣೆಗಾರಿಕೆ ಇವರ ಪಾಲಿಗೆ ಬಂತು. 1959 ರಿಂದ 15 ವರ್ಷಗಳ ದೀರ್ಘಕಾಲ ಅಲ್ಲಿ ಅಧ್ಯಾಪಕರಾಗಿದ್ದು ಸಾರ್ಥಕ ಸೇವೆಯನ್ನು ಸಲ್ಲಿಸಿದರು. ಇವರ ಸೇವಾವಧಿಯಲ್ಲಿ ತಯಾರಾದ ಅನೇಕ ವಸ್ತುಗಳು ಸ್ವಿಟ್ಜರ್‌ಲೆಂಡ್, ಆಸ್ಟ್ರೇಲಿಯಾ, ಸಿಡ್ನಿ ಮೊದಲಾದ ವಿದೇಶಗಳಿಗೆ ರಫ್ತು ಮಾಡಲ್ಪಡುತ್ತಿದ್ದುವು. ತಮ್ಮ ಸೇವೆಯ ಕೊನೆಯ ಮೂರು ವರ್ಷಗಳ ಕಾಲ ಆ ಸಂಸ್ಥೆಯ ಸೂಪರಿಂಟೆಂಡೆಂಟ್ ಆಗಿ ಬಡ್ತಿ ಪಡೆದು ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ತಮ್ಮ ಕರ್ತವ್ಯವನ್ನು ನಿರ್ವಹಿಸಿದರು. ಇವರ ಸೇವಾವಧಿಯಲ್ಲಿ ಚನ್ನಪಟ್ಟಣದ ಕರಕುಶಲ ಕೈಗಾರಿಕಾ ಶಾಲೆ ಮತ್ತು ಅಲ್ಲಿನ ಬೊಂಬೆಗಳು ಆಟಿಕೆಯ ವಸ್ತುಗಳು ತುಂಬಾ ಪ್ರಸಿದ್ಧಿಯನ್ನು ಗಳಿಸಿ, ಚನ್ನಪಟ್ಟಣದ ಕೀರ್ತಿಯನ್ನು ರಾಷ್ಟ್ರವ್ಯಾಪಿಯನ್ನಾಗಿಸಿದವು.

ಚನ್ನಪಟ್ಟಣದ ಕರಕುಶಲ ಕೈಗಾರಿಕಾ ಶಾಲೆಯಲ್ಲಿ ಕರ್ತವ್ಯ ನಿರತರಾಗಿ[...] ಶುದ್ಧೋದನರಿಗೆ, ತಮ್ಮ ಕಲಾಪ್ರತಿಭೆಯ ಪ್ರಕಾಶಕ್ಕೆ ಈ ಶಾಲೆಯ ಸೀಮಿ[...] ವಾತಾವರಣ ಸಾಲದು ಎಂಬ ಕೊರಗು ಸದಾ ಅವರ ಮನಸ್ಸನ್ನು ಬಾಧಿಸುತ್ತಿತ್ತು[...] ಅದೇ ಸಮಯಕ್ಕೆ ಮೈಸೂರಿನಲ್ಲಿ ತಾವು ಕಲಾವ್ಯಾಸಂಗ ಮಾಡಿದ ಚಾಮರಾಜೇಂ[...] ಕಲಾಶಾಲೆಯ "ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಆಫ್ ಆರ್ಟ್ಸ್" ಹುದ್ದೆ[...] ತಮ್ಮ ಹೆಸರನ್ನು ಶಿಫಾರಸು ಮಾಡಿರುವುದಾಗಿ ತಿಳಿದು, ತಾವು ವ್ಯಾಸಂ[...] ಮಾಡಿದ ಕಲಾಶಾಲೆಯಲ್ಲೇ ಶಿಕ್ಷಕರಾಗಿ ಸೇವೆ ಸಲ್ಲಿಸಬೇಕೆಂಬ ಹಂಬಲದಿಂ[...] 15.8.1959 ರಲ್ಲಿ ಮೈಸೂರಿನ ಚಿತ್ರಕಲಾವಿದರಲ್ಲಿ ಪ್ರಭಾವಿ ವ್ಯಕ್ತಿಯಾಗಿದ್ದ [...] ಪಿ. ಆರ್. ತಿಪ್ಪೇಸ್ವಾಮಿಯವರಿಗೆ ವೈಯುಕ್ತಿಕ ಪತ್ರವೊಂದನ್ನು ಬರೆದು, ತ[...] ಆಯ್ಕೆಗೆ ಸಹಾಯ ಮಾಡಬೇಕೆಂದು ಕೋರಿದರು. ಆ ಪತ್ರದ ಕೆಲವು ಸಾಲುಗ[...] ಹೀಗಿದೆ "I am eager to take up that post and do somethi[...] towards the Development of the art section, which is [...] downtrodden condition. I hope, in the cause of developing f[...] arts, you will take some interest". ಕಲಾವಿದ ಶುದ್ಧೋದನರ ಮಾತುಗ[...]

ತಾವು ವ್ಯಾಸಂಗ ಮಾಡಿದ ಶಾಲೆಯ ದುಃಸ್ಥಿತಿಯನ್ನು ಕಂಡು ವ್ಯಥೆ ಮತ್ತು ಅದರ ಪುನರುಜ್ಜೀವನದ ಬಗೆಗೆ ಎಲ್ಲಿಲ್ಲದ ಆಸಕ್ತಿ ಮತ್ತು ಮಮತೆ ಎದ್ದು ಕಾಣುತ್ತವೆ. ಶ್ರೀ ತಿಪ್ಪೇಸ್ವಾಮಿಯವರ ಪ್ರಾಮಾಣಿಕ ಪ್ರಯತ್ನ ಮತ್ತು ಆಗ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಕೆ. ನಾರಾಯಣ ಸ್ವಾಮಿಯವರ ಪ್ರಯತ್ನದಿಂದ ಇವರ ಅಭೀಪ್ಸೆ ಈಡೇರಿ, ಶುದ್ಧೋದನರು 1959ರ ಕೊನೆಯಲ್ಲಿ ಚಾಮರಾಜೇಂದ್ರ ಕಲಾಶಾಲೆಯ ವೈಸ್ ಪ್ರಿನ್ಸಿಪಾಲ್‌ರಾಗಿ ಅಧಿಕಾರ ವಹಿಸಿಕೊಂಡರು. ಕಲೆಯ ಇತಿಹಾಸ (History of Arts), ಕರಕುಶಲ ವಿಭಾಗ ಮತ್ತು ವಿನ್ಯಾಸ ಮೊದಲಾದ ಪಠ್ಯ ವಿಷಯವನ್ನು ಬೋಧಿಸುತ್ತಾ ಅತ್ಯುತ್ತಮ ಅಧ್ಯಾಪಕರೆಂದು ಜನಪ್ರಿಯತೆಯನ್ನು ಗಳಿಸಿ, ಸುಮಾರು 13 ವರ್ಷಗಳ ಕಾಲ ತಾವು ಕಲಿತ ಕಲಾಶಾಲೆಯ ಉನ್ನತಿಗಾಗಿ ಶ್ರಮಿಸಿದರು. ಇವರ ಕಾರ್ಯಕ್ಷಮತೆಯನ್ನು ಮೆಚ್ಚಿಕೊಂಡ ಸರ್ಕಾರ ನಿವೃತ್ತರಾದ ಬಳಿಕವೂ ಒಂದು ವರ್ಷಕಾಲ ಸೇವೆಯಲ್ಲಿ ಮುಂದುವರಿಯುವಂತೆ ಆದೇಶ ಹೊರಡಿಸಿತು. ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಧ್ಯಾಪಕರಾಗಿದ್ದ ಕಾಲದಲ್ಲಿ ಶುದ್ಧೋದನರಿಗೆ ವೃತ್ತಿ ಸಂತೃಪ್ತಿ (Job Satisfaction) ದೊರಕಿ, ಬಿಡುವಿನ ವೇಳೆಯನ್ನು ಸದುಪಯೋಗಪಡಿಸಿಕೊಂಡು ಉತ್ತಮ ಕಲಾಕೃತಿಗಳನ್ನು ರಚಿಸಿ ಕಲಾಪ್ರಪಂಚದಲ್ಲಿ ಯಶಸ್ಸುಗಳಿಸಲು ಸಾಧ್ಯವಾಯಿತು. ಅವರ ಅತ್ಯುತ್ತಮ ಕಲಾಕೃತಿಗಳೆಲ್ಲ ಈ ಅವಧಿಯಲ್ಲಿ ರಚಿತವಾದಂಥವು ಎಂಬುದನ್ನು ನೆನೆದು ಹರ್ಷಚಿತ್ತರಾಗುತ್ತಾರೆ. ಬೆಂಗಳೂರಿನ ನಗರಪಾಲಿಕೆಯ ಎದುರಿಗಿರುವ ಮಾಗಡಿ ಕೆಂಪೇಗೌಡನ ವಿಗ್ರಹ ಮತ್ತು ಕೆ. ಆರ್. ವೃತ್ತದಲ್ಲಿರುವ ಸರ್. ಎಂ. ವಿಶ್ವೇಶ್ವರಯ್ಯನವರ ವಿಗ್ರಹಗಳ ಮಾದರಿಗಳನ್ನು ಕ್ರಮವಾಗಿ ತಾವು ಮತ್ತು ತಮ್ಮ ಸಹಪಾಠಿ ದಿವಂಗತ ಎಸ್. ಎಸ್. ಸುಬ್ಬಕೃಷ್ಣ ಅವರು ರಚಿಸಿದುದಾಗಿಯೂ, ಈ ವಿಗ್ರಹಗಳನ್ನು ಸಿದ್ಧಪಡಿಸಲು ಮೂರುವರ್ಷಗಳು ಬೇಕಾಯಿತೆಂದೂ, ಈ ಎಲ್ಲ ಕೆಲಸಗಳೂ ತಮ್ಮ ಅಧಿಕಾರದ ಅವಧಿಯಲ್ಲಿ ನಡೆದುವೆಂದು ಸಂತೋಷವ್ಯಕ್ತಪಡಿಸುತ್ತಾರೆ. 1985ರಲ್ಲಿ ವಿಧಾನಸಭೆಯ ಸ್ಪೀಕರ್ ಆಗಿದ್ದ ಶ್ರೀ ಬಿ.ವಿ ಬಾಳಿಗ ಅವರು ವಿಧಾನ ಸಭೆಯ ಸಭಾಂಗಣದಲ್ಲಿ ಹಾಕಲು ಮಹಾತ್ಮ ಗಾಂಧೀಜಿಯವರ ಪೂರ್ಣಪ್ರಮಾಣದ ಭಾವಚಿತ್ರವನ್ನು ರಚಿಸುವ ಕೆಲಸವನ್ನು ಶುದ್ಧೋದನರಿಗೆ ವಹಿಸಿದರು. ಇವರಿಂದ ರಚಿತವಾಗಿ,

ರಾಷ್ಟ್ರಾಧ್ಯಕ್ಷರಾಗಿದ್ದ ಡಾ।। ಸರ್ವಪಲ್ಲಿ ರಾಧಾಕೃಷ್ಣನ್ ಅವರಿಂದ ಅನಾವರಣ ಮಾಡಿಸಲ್ಪಟ್ಟ ಆ ಭಾವಚಿತ್ರ ಈಗಲೂ ವಿಧಾನ ಸಭೆಯ ಸಭಾಂಗಣದಲ್ಲಿ ರಾರಾಜಿಸುತ್ತಿದೆ.

ಹೀಗೆ 1940ರಿಂದ ನಾನಾ ಹುದ್ದೆಗಳಲ್ಲಿದ್ದುಕೊಂಡು, ಕಲಾಕ್ಷೇತ್ರದಲ್ಲಿ ಸೇವೆಗೈದು 1969ರಲ್ಲಿ ನಿವೃತ್ತಿ ಹೊಂದುತ್ತಾರೆ. ಸರ್ಕಾರಿ ಉದ್ಯೋಗದಿಂದ ನಿವೃತ್ತಿ ಹೊಂದಿದರಾದರೂ, ಶುದ್ಧೋದನರ 'ಕುಂಚ ಪ್ರವೃತ್ತಿ' ಗೆ ಎಲ್ಲಿಯ ನಿವೃತ್ತಿ ? ಎಂತಲೇ 80 ವಸಂತಗಳನ್ನು ದಾಟಿರುವ ಶುದ್ಧೋದನರು ಸದಾ ಚಿತ್ರಕಲಾಕೃತಿಗಳ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಇಂದಿಗೂ ಕಾಣಬಹುದಾಗಿದೆ. ಪ್ರಕೃತಿ ಪ್ರಿಯ ಶುದ್ಧೋದನರು ಜಲವರ್ಣ ಮತ್ತು ತೈಲವರ್ಣಗಳೆರಡರಲ್ಲೂ ನಿಸ್ಸೀಮ ಸಾಧನೆ ಮಾಡಿದ್ದಾರೆ. ಅವರ ಕಲಾಕೃತಿಗಳು ಹಲವು ವಸ್ತುಸಂಗ್ರಹಾಲಯಗಳಲ್ಲೂ, ಸರ್ಕಾರಿ ಅತಿಥಿಗೃಹಗಳಲ್ಲೂ ಮತ್ತು ಖಾಸಗಿ ಸಂಗ್ರಹಾಲಯಗಳಲ್ಲೂ ಶೋಭಿಸುತ್ತಿರುವುದನ್ನು ಕಾಣಬಹುದು. ಇವರು ರಚಿಸಿರುವ ಕಲಾಕೃತಿಗಳಲ್ಲಿ ಪ್ರವಾಸಿಕೇಂದ್ರಗಳಾದ ಆಗುಂಬೆ, ಶ್ರವಣಬೆಳಗೊಳ, ಶೃಂಗೇರಿ, ಬಿಳಿಗಿರಿರಂಗನ ಬೆಟ್ಟ, ಶ್ರೀರಂಗಪಟ್ಟಣ, ಸೋಮನಾಥಪುರ, ಬೇಲೂರು, ಹಳೇಬೀಡು ಮತ್ತು ಮೈಸೂರು ನಗರದ ಸುತ್ತಮುತ್ತಲಿನ ಹಲವಾರು ಬೃಹದಾಕಾರದ ಕೃತಿಗಳು ಕಲಾರಸಿಕರ ಕಣ್ಮನಗಳನ್ನು ಆಕರ್ಷಿಸುತ್ತವೆ. ವಸ್ತುವಿನ ಆಯ್ಕೆಯಲ್ಲಿ ಕಲಾವಿದ ತನ್ನದೇ ಆದ ಪ್ರತಿಭೆಯನ್ನು ಮೆರೆದು, ತನ್ನ ಕೃತಿ ಕಲಾಪೂರ್ಣವಾಗುವಂತೆ ರಚಿಸಬಲ್ಲನೆಂಬುದಕ್ಕೆ ಈ ಮೇಲಿನ ಎಲ್ಲ ಕೃತಿಗಳನ್ನು ನಿದರ್ಶನವಾಗಿ ಗಮನಿಸಬಹುದು.

ಶುದ್ಧೋದನ ಅವರು ವಾಸ್ತವ ಪಂಥಕ್ಕೆ ಸೇರಿದ ಕಲಾವಿದರು. ತಮ್ಮ ಕೃತಿಗಳಲ್ಲಿ ವಾಸ್ತವಿಕತೆಯನ್ನು ಮೂಡಿಸಿರುವುದು ತಮ್ಮ ಕಲ್ಪನೆಗಳಿಂದ ಅದನ್ನು ಭಾವಗೀತಾತ್ಮಕವಾಗುವಂತೆ ಚಿತ್ರಿಸುವುದು ಇವರ ವೈಶಿಷ್ಟ್ಯ. ಇದಕ್ಕೆ ಉದಾಹರಣೆಯಾಗಿ ಅವರ "ಜ್ಞಾನೋದಯ" ಮತ್ತು "ಸ್ಮಶಾನದಲ್ಲಿ ಸರ್ವರೂ ಸಮಾನರು" ಮತ್ತು "ಮೂಕ ಸಾಕ್ಷಿ" ಮೊದಲಾದ ಕೃತಿಗಳನ್ನು ನೋಡಬಹುದು. ಇವರು ಪ್ರಕೃತಿ ಚಿತ್ರಗಳನ್ನು ಹೆಚ್ಚಾಗಿ ಜಲವರ್ಣಗಳಲ್ಲಿ ಚಿತ್ರಿಸಿದ್ದಾರೆ. ಈ

ಚಿತ್ರಗಳು ಸೂಕ್ಷ್ಮವಾದ ವಿವರಗಳಿಂದ ಕೂಡಿದ್ದು, ಭಾರತೀಯ ಕಲೆಯಲ್ಲಿ ಕಂಡು ಬರುವ ಕೋಮಲತೆ, ಲಾಲಿತ್ಯಗಳನ್ನು ಮೈಗೂಡಿಸಿಕೊಂಡು, ಅಪೂರ್ವವಾದ ವರ್ಣಸಂಯೋಜನೆಯಿಂದ ಕೂಡಿ ಒಟ್ಟಂದದಲ್ಲಿ ವಾಸ್ತವಶೈಲಿಯಲ್ಲಿ ತುಂಬಾ ಪರಿಣಾಮಕಾರಿಯಾಗಿ ಮೂಡಿಬಂದಿವೆ. ವರ್ಣ ಸಂಯೋಜನೆ ಮತ್ತು ರೇಖೆಗಳು ಎಷ್ಟು ಪ್ರಾಧಾನ್ಯವೋ, ವಸ್ತುವಿಗೂ ಅಷ್ಟೇ ಪ್ರಾಮುಖ್ಯತೆ ನೀಡಿರುವುದು ಇವರ ಕೃತಿಗಳ ವೈಶಿಷ್ಟ್ಯವಾಗಿದೆ. ಶುದ್ಧೋದನರು ಮೈಸೂರಿನ ಸುತ್ತಮುತ್ತಲಿನ ಸುಂದರ ತಾಣಗಳ ನಿಸರ್ಗ ಸೌಂದರ್ಯವನ್ನು, ಅದರ ಸಿರಿವಂತಿಕೆಯನ್ನು ತಮ್ಮ ಜಲವರ್ಣ ಮತ್ತು ತೈಲವರ್ಣದ ಪ್ರಕೃತಿ ಚಿತ್ರಗಳಲ್ಲಿ ಮನೋಜ್ಞವಾಗಿ ಸೆರೆ ಹಿಡಿದಿದ್ದಾರೆ.

ಶುದ್ಧೋದನ ಅವರು ಪ್ರಕೃತಿ ಚಿತ್ರರಚನೆಯಲ್ಲಿ ಹೇಗೋ ಹಾಗೆ ಭಾವಚಿತ್ರ ಅಥವಾ ವ್ಯಕ್ತಿ ಚಿತ್ರರಚನೆಯಲ್ಲೂ ಸಿದ್ಧಹಸ್ತರು. ಅವರು ಅನೇಕ ಸಿದ್ಧ ಪ್ರಸಿದ್ಧರ ಭಾವಚಿತ್ರಗಳನ್ನು ರಚಿಸಿದ್ದು ಅವುಗಳಲ್ಲಿ ಮಹಾತ್ಮಗಾಂಧಿ, ನೆಹರು, ಲಾಲಬಹದ್ದೂರ್ ಶಾಸ್ತ್ರಿ, ಇಂದಿರಾಗಾಂಧಿ, ಸರ್. ಎಂ. ವಿಶ್ವೇಶ್ವರಯ್ಯ ಮತ್ತು ರಾಷ್ಟ್ರಕವಿ ಕುವೆಂಪು ಅವರ ಚಿತ್ರಗಳನ್ನು ಹೆಸರಿಸಬಹುದು. ಭಾವಚಿತ್ರಗಳ ರಚನೆಯಲ್ಲಿ ಆ ವ್ಯಕ್ತಿಗಳ ವ್ಯಕ್ತಿತ್ವದ ಗಾಂಭೀರ್ಯ, ಭಾವಪೂರ್ಣ ಮುಖಮುದ್ರೆ, ಆಲೋಚನಾಪರತೆ ಮೊದಲಾದ ಭಾವನೆಗಳನ್ನು ಸೆರೆಹಿಡಿದು ಯಥಾರ್ಥವಾಗಿ, ಚೇತೋಹಾರಿಯಾಗಿರುವಂತೆ ಚಿತ್ರಿಸುವಲ್ಲಿ ತಮ್ಮತನವನ್ನು ಮೆರೆದಿದ್ದಾರೆ. ಇವರು ರಚಿಸಿದ ಮಹಾತ್ಮಗಾಂಧಿಯವರ ಪೂರ್ಣ ಪ್ರಮಾಣದ ಚಿತ್ರ ವಿಧಾನಸೌಧದ ಸಭಾಂಗಣವನ್ನುಅಲಂಕರಿಸಿದ್ದರೆ, ಶ್ರೀಮತಿ ಇಂದಿರಾಗಾಂಧಿಯವರ ಚಿತ್ರ ನವದೆಹಲಿಯ ಕರ್ನಾಟಕ ಭವನದಲ್ಲಿ ಹಾಗೂ ಸರ್ ಎಂ. ವಿಶ್ವೇಶ್ವರಯ್ಯನವರ ಚಿತ್ರ ಬೆಂಗಳೂರಿನ ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯದಲ್ಲಿ ಶೋಭಿಸುತ್ತವೆ. ಲಾಲಬಹದ್ದೂರ್ ಶಾಸ್ತ್ರಿ ಹಾಗೂ ಕುವೆಂಪು ಅವರ ಚಿತ್ರಗಳು ಕಲಾವಿದರ ವೈಯುಕ್ತಿಕ ಸಂಗ್ರಹಾಲಯದಲ್ಲಿದೆ.

ಕರ್ನಾಟಕದ ಹಳೆಯ ತಲೆಮಾರಿನ ಹಿರಿಯ ಕಲಾವಿದ ಶುದ್ಧೋದನರಿಗೆ ಖ್ಯಾತಿಯನ್ನು ತಂದುಕೊಟ್ಟು ಅವರ ಕೆಲವು ಕೃತಿಗಳನ್ನು ಗಮನಿಸಿದಲ್ಲಿ,

ಕಲಾಕ್ಷೇತ್ರದಲ್ಲಿ ಅವರು ಏರಿರುವ ಎತ್ತರವನ್ನು ಗುರುತಿಸಲು ಸಾಧ್ಯವಾಗುತ್ತದೆ. "ಆಗುಂಬೆ" ಎಂಬ ಶೀರ್ಷಿಕೆಯ ಜಲವರ್ಣದ ಭೂದೃಶ್ಯದಲ್ಲಿ ಸಹ್ಯಾದ್ರಿಶ್ರೇಣಿಯ ದಟ್ಟವಾದ ಕಾಡಿನ ನಡುವೆ, ಹಾವಿನಂತೆ ಹರಿದು ಘಟ್ಟವನ್ನಿಳಿಯುವ ರಸ್ತೆ, ಘಟ್ಟದ ಕೆಳಗೆ ಅನಂತವಾಗಿ ನೆಲವನ್ನಪ್ಪಿ ಮಲಗಿರುವ ಕಾನನದ ಸುನೀಲ ಸೌಂದರ್ಯ ಮುಂತಾದ ವಿವರಗಳನ್ನು ಮೆದುವರ್ಣದಲ್ಲಿ ರಮ್ಯವಾಗಿ ಸೆರೆಹಿಡಿದಿದ್ದಾರೆ. ಶ್ರವಣಬೆಳಗೊಳದ ಇಂದ್ರಗಿರಿಯನ್ನು ಇಳಿದು ಬರುವಾಗ ಮೊದಲ ಹಂತದಲ್ಲಿ ಸಿಗುವ ಸ್ಥಂಭದ್ವಾರದ ಚೌಕಟ್ಟಿನ ಮೂಲಕ ಬೆಳುಗೊಳದ ಚೆಲುವನ್ನು ಇವರು ಕಂಡರಿಸಿದ್ದಾರೆ. ಬೆಳುಗೊಳದ ಭವ್ಯವಾದ ಸರೋವರದ ಸೌಂದರ್ಯ, ಅದರಲ್ಲಿ ಪ್ರತಿಫಲಿತವಾಗಿರುವ ಚಂದ್ರಗಿರಿಯ ದೃಶ್ಯ ಚಿತ್ರಣ "ಶ್ರವಣಬೆಳುಗೊಳ" ಎಂಬ ಚಿತ್ರದಲ್ಲಿ ಅಪೂರ್ವವಾಗಿ ಮೂಡಿಬಂದಿದೆ. ಸಂಧ್ಯಾಸಮಯದಲ್ಲಿ ಮೈಸೂರಿನ ಮಾನಸ ಗಂಗೋತ್ರಿಯ ಹಿನ್ನೆಲೆಯಲ್ಲಿ ಚಿತ್ರಿಸಿರುವ "ಕುಕ್ಕರಹಳ್ಳಿ ಕೆರೆ" ಯ ಚಿತ್ರಣದಲ್ಲಿನ ವರ್ಣಸಂಯೋಜನೆ ವಾತಾವರಣದ ಪ್ರಶಾಂತತೆ ಹಾಗೂ ರಮಣೀಯತೆಯನ್ನು ಮನಸ್ಸಿಗೆ ತಂದುಕೊಡುತ್ತದೆ. ಅಪೂರ್ವವಾದ ಇವರ ಇನ್ನೊಂದು ಕೃತಿ "ಗೋಲ್ಡ್‌ಮೊಹರ್" ಎಂಬ ಪ್ರಕೃತಿ ಚಿತ್ರದಲ್ಲಿ ಡಾಳಾಗಿ ಕಾಣುವ ಪ್ರಕಾಶವಾದ ಕೆಂಪುಬಣ್ಣದ ವರ್ಣಮೈತ್ರಿ ಮೋಹಕವಾಗಿದೆ. "The Wise" ಎಂಬ ಕೃತಿಯಲ್ಲಿ ದಟ್ಟವಾದ ಹಸುರಿನ ಹಿನ್ನೆಲೆಯಲ್ಲಿ ಮರದಕೊಂಬೆಯನ್ನೇ ಕುಳಿತ ಬೃಹದಾಕಾರದ ಕೋತಿಯೊಂದು "ಕೆಟ್ಟದ್ದನ್ನು ನೋಡಬಾರದು, ಆಡಬಾರದು ಕೇಳಬಾರದು" ಎಂದು ಪ್ರತಿಜ್ಞೆ ಮಾಡಿ ಕುಳಿತಿರುವಂತೆ ಚಿತ್ರಿಸಿರುವ ದೃಶ ಕಲಾವಿದರ ಅದ್ಭುತ ಕಲ್ಪನೆಗೆ ಸಾಕ್ಷಿಯಾಗಿದೆ. ವಸ್ತುಪ್ರದರ್ಶನವೊಂದರಲ್ಲಿ ಪ್ರದರ್ಶಿತವಾದ ಈ ಕೃತಿಯನ್ನು ತದೇಕಚಿತ್ತರಾಗಿ ವೀಕ್ಷಿಸುತ್ತಿದ್ದ ದಿವಂಗ ಕುವೆಂಪು ಅವರನ್ನು ಕಲಾವಿದರು ಕೃತಿಗೆ ಕನ್ನಡ ಶೀರ್ಷಿಕೆಯೊಂದನ್ನು ಸೂಚಿಸುವಂ ಭಿನ್ನವಿಸಿದಾಗ ಸ್ವಲ್ಪ ಹೊತ್ತು ಆಲೋಚಿಸಿ ನಿಂತ ಕವಿಗಳು "ಪೂರ್ಣಜ್ಞಾನಿ ಎಂದು ಹೆಸರಿಡಲು ಸೂಚಿಸಿದುದಾಗಿ ಶುದ್ಧೋದನರು ನೆನೆಯುತ್ತಾರೆ. ಪರಿಸ ಸಂರಕ್ಷಣೆಯ ವಸ್ತುವನ್ನು ಆರಿಸಿಕೊಂಡೂ ಕೆಲಸಮಾಡಿದ್ದಾರೆನ್ನುವುದಕ್ಕೆ ಅ 'ಮೂಕ ಸಾಕ್ಷಿ' (The Mute Witness) ಕೃತಿ ನಿದರ್ಶನವಾಗಿದೆ. 'Perchin for Ride' ಎಂಬ ಕೃತಿಯಲ್ಲಿ ಬೃಹದಾಕಾರದಾನೆಯ ಮೇಲೆ ಪುಟ್ಟ ಹಕ್ಕಿಯೊಂ



ಆಲದ ಮರ Banyan Tree



ಪ್ರಕೃತಿ ಚಿತ್ರ Landscape



ಕೋತಿ Monkey

ಕುಳಿತು ಆನಂದದಿಂದ ಸವಾರಿ ಮಾಡುವಂತಿರುವ ದೃಶ್ಯ ಚಾರ್ಲ್ಸ್ ಡಾರ್ವಿನ್ನನ "Struggle for Existance" ಎಂಬ ಪ್ರಸಿದ್ಧ ಹೇಳಿಕೆಯುನ್ನು ವಿಡಂಬಿಸುವಂತೆ ತೋರಿಬರುವ ಸುಂದರ ಸಂಯೋಜನೆಯಾಗಿದೆ. ಆಂಗ್ಲ ಕವಿ ಬೆಂಜಮಿನ್ನರ ಕವಿತೆಯಿಂದ ಪ್ರೇರಣೆ ಪಡೆದು ರಚಿಸಿರುವ "ಸ್ಮಶಾನದಲ್ಲಿ ಸರ್ವರೂ ಸಮಾನರು" (All are equal in the grove) ಎಂಬ ಕೃತಿ ದಟ್ಟವಾದ ವರ್ಣಸಂಯೋಜನೆಯ ಬಳಕೆಯ ಹಿನ್ನೆಲೆಯಲ್ಲಿ ಮನಸ್ಸಿಗೆ ಮ್ಲಾನತೆಯನ್ನು ಉಂಟುಮಾಡುವಷ್ಟು ಪರಿಣಾಮಕಾರಿಯಾಗಿ ಮೂಡಿ ಬಂದಿದೆ. "Time Lost" ಎಂಬ ಪ್ಲಾಸ್ಟರ್ ಆಫ್ ಪ್ಯಾರಿಸ್ ಕೃತಿಯಲ್ಲಿ ಕಲಾವಿದರ ಕವಿಮನೋಧರ್ಮ ಪ್ರಕಟವಾಗಿರುವುದನ್ನು ಗುರುತಿಸಬಹುದು. ಇವುಗಳಲ್ಲದೆ ವಿಧಾನಸೌಧದಲ್ಲಿರುವ ಸೋಮನಾಥಪುರದ ದೇವಾಲಯದ ದೃಶ್ಯ, ಬೆಂಗಳೂರಿನ ಕಾಫಿ ಬೋರ್ಡ್ ಕಟ್ಟಡದಲ್ಲಿರುವ 8x4 ಅಡಿಗಳ ಬೃಹದಾಕಾರದ 'ಕಾಫಿತೋಟ' ದೃಶ್ಯ. ಬಾದಾಮಿಯ ಬೃಹತ್ ಶಿಲೆಗಳು, ಕೊಡಗಿನ ಅಬ್ಬೆ ಜಲಪಾತ, ಕರಿಘಟ್ಟ, ಸೋಲಿಗರ ಶಾಲೆ ಮೊದಲಾದ ಕೃತಿಗಳು, ಕಲಾಪ್ರಪಂಚದಲ್ಲಿ ಶುದ್ಧೋದನರಿಗೆ ಶಾಶ್ವತ ಸ್ಥಾನವನ್ನು ಗಳಿಸಿಕೊಟ್ಟಿವೆ.

ಇವರು ಹಲವಾರು ಚಿತ್ರಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿ ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಅವುಗಳಲ್ಲಿ 3 ಚಿನ್ನದ ಪದಕಗಳು ಮತ್ತು 7 ಬೆಳ್ಳಿಯ ಪದಕಗಳನ್ನು ನೆನಪಿಗಾಗಿ ಇಂದಿಗೂ ಉಳಿಸಿಕೊಂಡಿದ್ದಾರೆ. ತಮ್ಮ ಕೃತಿಗಳ ಮೊಟ್ಟ ಮೊದಲ ಏಕವ್ಯಕ್ತಿ ಪ್ರದರ್ಶನ (One man show)ವನ್ನು 1939ರಲ್ಲಿ ಏರ್ಪಡಿಸಿದ್ದುದಾಗಿ ನೆನೆದುಕೊಳ್ಳುತ್ತಾರೆ. ಆಗ ಆ ಪ್ರದರ್ಶನವನ್ನು ನೋಡಲು ಬಂದ, ಕೋಲಾರದ ಚಿನ್ನದ ಗಣಿಗಳ ಆಡಳಿತ ಮಂಡಳಿಯ ಅಂದಿನ ಚೇರ್‌ಮನ್‌ರಾಗಿದ್ದ ಆರ್.ಜಿ.ಕೆ. ಮೆನನ್ ಎಂಬುವರು ಅಲ್ಲಿ ಪ್ರದರ್ಶಿತವಾಗಿದ್ದ ಮೈಸೂರು, ನಂಜನಗೂಡು ಮತ್ತು ಶ್ರೀರಂಗಪಟ್ಟಣದ ಸುತ್ತಣ ಪ್ರಕೃತಿ ದೃಶ್ಯಗಳ ಕಲಾಕೃತಿಗಳನ್ನು ಬಹುವಾಗಿ ಮೆಚ್ಚಿಕೊಂಡು, ಶ್ರೀರಂಗಪಟ್ಟಣಕ್ಕೆ ಸಂಬಂಧಿಸಿದ ನಾಲ್ಕು ಕಲಾಕೃತಿಗಳನ್ನು ಆರಿಸಿಕೊಂಡು, ಒಂದೊಂದು ಚಿತ್ರದ ಬೆಲೆಯೆಷ್ಟು ? ಎಂದು ಶುದ್ಧೋದನರನ್ನು ಪ್ರಶ್ನಿಸಿದರಂತೆ. ಎಳವರೆಯದ ಶುದ್ಧೋದನರಿಗೆ ಹೆಚ್ಚು ಬೆಲೆ ಹೇಳಿದರೆ ಕೊಂಡುಕೊಳ್ಳುತ್ತಾರೋ ಇಲ್ಲವೋ ಎಂಬ ಅಂಜಿಕೆ.

ಹಾಗಾಗಿ ಸಂಕೋಚದಿಂದ “35 ರೂಪಾಯಿ ಕೊಡಿ” ಎಂದರಂತೆ. ಕಲಾಭಿಮಾನಿಯಾದ ಆ ಆಂಗ್ಲವ್ಯಕ್ತಿ "No youngman, Just double the price" ಎಂದು ಒಂದೊಂದು ಚಿತ್ರಕ್ಕೆ 70 ರೂಪಾಯಿಗಳಂತೆ 280 ರೂಪಾಯಿಗಳನ್ನು ಕೊಟ್ಟು ಬೆನ್ನು ತಟ್ಟಿದುದನ್ನು ಧನ್ಯತೆಯ ಭಾವದಿಂದ ಸ್ಮರಿಸಿಕೊಳ್ಳುತ್ತಾರೆ. 1992 ರಲ್ಲಿ ಬೆಂಗಳೂರಿನ ಕೆ. ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ತಮ್ಮ ಕಲಾಕೃತಿಗಳ ಕೊನೆಯ ಪ್ರದರ್ಶನವನ್ನು ಏರ್ಪಡಿಸಿದ್ದರು. ಅಂದಿನ ಕಲಾಪ್ರದರ್ಶನವನ್ನು ಕರ್ನಾಟಕ ಸರ್ಕಾರದ ಆಗಿನ ಮುಖ್ಯ ಕಾರ್ಯದರ್ಶಿಯಾಗಿದ್ದ ಶ್ರೀ ಟಿ. ಪಿ. ಇಸ್ಸಾರ್ ಅವರು ಉದ್ಘಾಟಿಸಿ ತಾವು ಮೆಚ್ಚಿಕೊಂಡ 4 ಚಿತ್ರಗಳನ್ನು ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆಂದು ಖರೀದಿಸಿದ್ದರಂತೆ. ಹೀಗೆ ಸುಮಾರು ಆರು ದಶಕಗಳ ಕಾಲ ಅವಿರತರಾಗಿ ಕಲಾಸೇವೆಯಲ್ಲಿ ನಿರತರಾಗಿ ಕರ್ನಾಟಕ ಚಿತ್ರಕಲೆಗೆ ತಮ್ಮ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಕಲಾಪ್ರಪಂಚದಲ್ಲಿ ಇವರು ಸಲ್ಲಿಸಿದ ನಿಷ್ಕಾಮ ಸೇವೆಯನ್ನು ಗುರುತಿಸಿದ ಕರ್ನಾಟಕ ಸರ್ಕಾರ ಮಾಸಾಶನವನ್ನು ನೀಡಲು ಮುಂದೆ ಬಂದಾಗ ಅದನ್ನು ವಿನಯಪೂರ್ವಕವಾಗಿ ನಿರಾಕರಿಸಿದುದಾಗಿ ಹೇಳುತ್ತಾರೆ. ಶ್ರೀ ಶುದ್ಧೋದನ ಕಲಾಸೇವೆಯನ್ನು ಗುರುತಿಸಿದ ರಾಜ್ಯಲಲಿತ ಕಲಾ ಅಕಾಡೆಮಿ 1971ರಲ್ಲಿ ಪ್ರಶಸ್ತಿ ಮತ್ತು ಫಲಕಗಳನ್ನಿತ್ತು ಅವರನ್ನು ಗೌರವಿಸಿದೆ.

80 ವಸಂತಗಳನ್ನು ಕ್ರಮಿಸಿರುವ ಶುದ್ಧೋದನರು ಶತಾಯುಷಿಗಳಾಗಿ ಬಾಳಲಿ, ಅವರ ಪಳಗಿದ ಕುಂಚದಿಂದ ಇನ್ನೂ ಹಲವಾರು ಉತ್ತಮ ಕೃತಿಗಳು ಮೂಡಿ ಬರಲಿ ಎಂಬುದು ಎಲ್ಲ ಕನ್ನಡಿಗರ ಹಂಬಲವಾಗಿದೆ.

– ಪರಮೇಶ



# M. J. Shudodana

In the vicinity of Doctor's corner in Gokulum one of the calmest of localities of Mysore, there is a cottage like house. As you step into the house, you feel as if you have entered an art gallery. Paintings hanging on the wall, several portaits leaning against the wall and that figure on the easel waiting for that final touch of the artist - all transport you into a different world. Then, as you begin to look around, you discover, it is not just an art gallery at all but a veritable art museum itself. Several curious toys, many innovative wooden gift articles, sculpture of all sorts - crowd the living space. In their midst sits a respectabled man, well past his eighteth year, dressed in

colourful lungi and white banayan. This genetlemen, slightly obese, is the creator of this art world, Mr. M.J. Shudodana, Mr. shudodana, though 'retired', is busily employed in creating and extending the horizons of art world with his brush and chisel.

Shudodana's childhood played a crucial role in moulding the artist in him. His father, Sri. M.S.Thyagarajan, was an acclaimed artist of his generation. Besides, he had also achieved excellance in music and sculpture. He was a senior teacher in the Teacher's Training Institute at Mysore. Shudodana's mother Smt. Mayadevi, was the very personification of simplicity, gentleness and courtesy. Shudodana was born to them on Feb. 22, 1914. As a child he would spend endless hours watching his father create wonders with brush and colour. Thus was the seed planted to branch out latter.

* * *

Shudodana had his primary education in a school attached to the Institute headed by his own father. Sri. Krishna Iyangar was the headmaster of the school then. Sri Jagadeshan had rented a house on Irving road at Rs. 10/- a month. The father and the son would walk together to the school.

As with most of us, maths was the toughnut for Shudodana too. One his maths teacher Sri. Keshava Rao was engrossed in solving a problem on the black board.

The illustrious student was equally lost in drawing a caricature of his teacher. When the teacher discovered his pupils' acheivement, he was duly punished. He was even threatened with the loss of his finger's, if he persisted. Persist, ofcourse, Shudodana did, and that has made all the difference to-day.

During Shudodana's student days drawing was a part of the curriculum. But the school did not have a regular teacher to handle the subject. So, whenever, it was the drawing period, Shudodana was sent for. Some senior teacher would invite him to draw on the black board, and ask the class to copy it. It is here, Mr. Shudodana proudly recollected, that he met R.K.Narayan's brother, R.K.Balaram as his classmate. All his high school days were devoted to the study of drawing. When he passed out, he had secured 95% of marks in the subject. Seeing the boy's attitude and zeal, his teacher Sri. Katuri Raja chetty, advised his father to encourage him.

Sensing this eldest son's potential, Sri. Jagadeshan enroled him in Jayachamarajendra Arts School. Sri. S. Ramaswamy Iyangar, the superintendent of the school, was so impressed by the boys performance in the entrance test, that he was directly admitted to course-III. Here, the young artists talents were honed by art-world gaints like Tankasala, F. B.Yellavatti, K.Keshaviah and Govindraja naidu, ofcourse, his father was always there nurturing his talents. Further he had the wonderful

opportunity of observing the great Rajaravivarma at work. Ravivarma was then working in the Mysore palace at the King's (Nalvadi Krishana Raja Wodeyar) invitation. During his stay in the arts school, Shudodana paid special attention to water and oil colours. With the able guidance of men like Tankasala & Yallavatti, Shudodana acquired mastery in water and oil colour. He also exhibited some of his works in the 1936 Dasara Exhibition. This earned him the appreciation of art connoisseurs of Mysore. More importantly for him, his teacher Yallavatti also noded his approval.

In the meanwhile Shudodana had distinguished himself by acquiring a diploma in Arts from Madras school of Arts. He had also picked up the finer points of portraiture from Sri. Keshavaiah.

* * *

Soon after, the completion of his education, Dr.M.H. Krishana, the then Director of Oriental Research Institute, appointed him as the institutes draughtsmen on a pay of Rs.40/- a month. A little later, Mr. M.A.Srinivas, the then Industrial Minister, came to be very impressed by the artist talents. Almost immidiately, he posted Mr. Shudodana as arts teacher in Channapattana Handicraft School. Here he was entrusted with the responsibility of designing novel toys, flowervases, & exquisite jewel boxes and other such items. From 1954, for fifteen long

years, Mr. Shudodana served the Institute with absolute dedication. Many of the articles produced during his tenure were exported to far off lands like Switzerland, America, Sydney, etc., by the time he retired as the superintedent of the school, Mr.Shudodana had spread the fame of Channapattana far and wide.

* * *

All through his long years at Channapattana, Mr.Shudodana had one grouse - that he did not enough oppurtunity for his talents to really bloom. This was overcome when he joined the Chamrajendra Arts School, - the school that had taught him many things- as the Assistant Superintendent of Arts. But this was not very easily achieved either. The moment he knew of the vacancy he was forced to seek the help Mr. B.R.Tippeswamy - a man of great influance in arts circles. In a personal letter written to him on August 15, 1994, he says, "I am eager to take up that post and do something towards the development of the arts section which is in a down trodden condition. I hope, in the course of developing the finearts, you will take some interest." The letter itself is a glowing tribute to Mr.Shudodana's concern for his school and his profession. With the help of Mr. Tippeswamy and Mr.Narayanaswamy. K. (Then Industrial Minister), he became the vice-principal of the Institute towards the

end of 1959. Teaching the History of arts, crafts & Designs, he soon became one of the most loved and respected teachers of the Institute. Recognising his dedication State Government requested him to head the Institute, for a two year term even after his retirement. It was only here, says Mr. Shudodana, he had found, job satisfaction.

* * *

Even when teaching he had devoted his spare time to create great pieces of art. He fondly remembers that it was during this stay in the institute, Many of his best works were produced. He says with a sense of pride and satisfaction, that the models for the Statues of Sir. M. V. and Magadi Kempegowda were conceived by himself and his friend late N. S. Subbakrishna respectively. The Statues were completed after three years of dedicated labour. Even to this day the Statue of Magadi Kempe-gowda, and Sir M.V. could be seen infornt of Corpora-tion Building and at K.R.Circle in Bangalore, respec-tively. Again in 1985 he was entrusted with the respon-sibility of painting a life-size portrait of Mahathm Gandhi by the speaker of Legislative assembly. Th Portrait, unveiled by Sri. S. Radhakrishanan, is in th State Assembly hall. It is a tribute both to Gandhiji an Shudodana's artistic perfection.

Thus after serving the art world in various capacitie from 1949, onwards he retired from Govt. service

1969. But does an artist ever retire ? The man past 80 years, is still busy with his brush and palatte.

* * *

Mr. Shudodana's work adorn many museums and Govt guest houses all over the country. They include his land scapes of Agumbe, Shravanabelagola, Sringeri, Biligiriranga's Hills, Srirangapatna, Somanathapura just to name a few. They all bear testimony to the truth that every artist reveals his unique talents in the very choice of his subject. He belongs to the realistic school. What makes his creations special is the lyrical grace he endows to them. His "epiphenny", "All are equal in grave", "Dumb witness" are all cast in the above mould. He mainly uses water colour for his land scapes. In the finer details of his paintings could be seen a gentleness a grace and an exquisite composition. All these characterstic features of Indian art colase to create realistic beauties. He pays equal attention to colour composition, lines and the theme. He has captured with impecable ease, the beauty spots in and around Mysore in water and oil colour.

His portraits too show a touch of class. He has many portraits to his credit. Mahathma Gandhi, Pandit Nehru, Sir. M.V., Rastra Kavi Kuvempu.... name any gaint of modern India, Shudodana has done their portraits. With a refreshing originality he recreates the Majestisity, their

but the gentleman that Mr. Menon was, he cooly said, "No young man double the price and pack them all". Thus they fetched him Rs. 280/-. In the 1992 exhibition, held at Venkatappa art gallery, the incident repeated itself. Mr. T.P. Issar, the then chief secretary of the State, purchased four of the exhibits on the spot on behalf of Tourism & Broad casting Department.

Like this, Mr. Suddodana has served the art world tirelesly for more than four core years. He has added colours to Karnataka art history. When the State, recognisied, his services, offered him an honorarium, he refused the offer with all humility. The State Govt. later honoured him with the Lalitakala Academy award in 1971.

Let the man, who was lived to be eighty, live to be a centurion to enrich the art world - is the fond wish of every Kannadiga.

## ಅಕಾಡೆಮಿಯ ಹೊಸ ಪ್ರಕಟಣೆಗಳು

- ಕಲಾಕೋಶ
- ಚಿತ್ರಕಲಾ ದರ್ಪಣ
- ಕರ್ನಾಟಕ: ಪ್ರಾಗಿತಿಹಾಸ ಚಿತ್ರಕಲೆ
- ಛಾಯಾಗ್ರಹಣ
- ಡಾ। ಶ್ವೆಟೊಸ್ಲಾವ್ ರೋರಿಕ್
- ಮಧ್ಯಪ್ರದೇಶದ ಕಲೆ
- ಪಿ. ಆರ್. ತಿಪ್ಪೇಸ್ವಾಮಿ
- ಟಿ. ಪಿ. ಅಕ್ಕಿ
- ಎಸ್. ನಂಜುಂಡಸ್ವಾಮಿ
- ಮೂಡುಗೋಡು ಹಿರಣ್ಯಪ್ಪ
- ಬಾನಯ್ಯ ಗರುಡಾದ್ರಿ

